## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 01. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 428 |
| 02. | ಸದಸ್ಯರ ಹೆಸರು | : | ಶ್ರೀ. ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 03. | ಉತ್ತರಿಸುವ ದಿನಾಂಕ | : | 19-07-2019 |
| 04. | ಉತ್ತರಿಸುವ ಸಚಿವರು. | : | ಮಾನ್ಯ ಗೃಹ ಸಚಿವರು. |

| ಕ್ರಮ ಸಂಖ್ಯೆ | ವಿಷಯ | ಉತ್ತರ |
|---|---|---|
| ಅ. | ಮಕ್ಕಳು ಮಾದಕ ಪದಾರ್ಥಗಳಿಗೆ ಅದರಲ್ಲೂ ಶಾಲಾ ಮಕ್ಕಳು ಈ ಮಾದಕ ಪದಾರ್ಥಗಳ ಚಟಕ್ಕೆ ಬೀಳುತ್ತಿರುವ ಮಾಹಿತಿ ಸರ್ಕಾರದ ಗಮನಕ್ಕೆ ಬಂದಿದೆಯೆ: | ರಾಜ್ಯದಲ್ಲಿ ಶಾಲಾ ಮಕ್ಕಳು ಮಾದಕ ಪದಾರ್ಥಗಳ ಚಟಕ್ಕೆ ಬಲಿಯಾಗಿರುವ ಕುರಿತು ಯಾವುದೇ ಪ್ರಕರಣಗಳು ವರದಿಯಾಗಿರುವುದಿಲ್ಲ. |
| ಆ | ಮಾದಕ ಪದಾರ್ಥಗಳ ದುಷ್ಪರಿಣಾಮಗಳ ಬಗ್ಗೆ ಶಾಲಾ ಮಟ್ಟದಲ್ಲಿ ಅರಿವು ಮೂಡಿಸಲು ಸರ್ಕಾರ ಏನಾದರೂ ಕ್ರಮ ಕೈಗೊಂಡಿದೆಯೇ: | ➤ ಸರ್ಕಾರದ ಆದೇಶ ಸಂಖ್ಯೆ: ಒಇ 16 ಪಿಎನ್‌ಡಿ 2018, ದಿನಾಂಕ: 27.08.2018ರಲ್ಲಿ ರಾಜ್ಯದಲ್ಲಿ ಮಾದಕ ವಸ್ತುಗಳ ಬಳಕೆಯನ್ನು ತಡೆಗಟ್ಟಲು ಶಾಲಾ-ಕಾಲೇಜು ವಿಶ್ವವಿದ್ಯಾಲಯಗಳಲ್ಲಿ ವಿವಿಧ ಇಲಾಖೆಗಳ ಅಧಿಕಾರಿಗಳನ್ನೊಳಗೊಂಡಂತೆ ಸಮಿತಿ ರಚಿಸಿ ಆದೇಶ ಹೊರಡಿಸಲಾಗಿದೆ.<br>➤ ಶಾಲಾ ವಿದ್ಯಾರ್ಥಿಗಳಿಗೆ ಮಾದಕ ದ್ರವ್ಯ ಮಾರಾಟ ಮತ್ತು ಬಳಕೆಯಿಂದ ಉಂಟಾಗುವ ದುಷ್ಪರಿಣಾಮಗಳ ಬಗ್ಗೆ "ಧೂಮಪಾನ ವಿಷಪಾನ" ಎಂಬ ಬೀದಿ ನಾಟಕ ಏರ್ಪಡಿಸಲಾಗಿದೆ.<br>➤ ಠಾಣಾ ವ್ಯಾಪ್ತಿಯಲ್ಲಿ ಬರುವ ಶಾಲೆಗಳಲ್ಲಿ ಠಾಣಾಧಿಕಾರಿಗಳು ಮತ್ತು ಪೊಲೀಸ್ ಸಿಬ್ಬಂದಿಗಳು ಮಾದಕ ದ್ರವ್ಯ ಸೇವನೆಯಿಂದ ಆಗುವ ದುಷ್ಪರಿಣಾಮಗಳ ಬಗ್ಗೆ ತಿಳುವಳಿಕೆ ಮೂಡಿಸಲಾಗುತ್ತಿದೆ ಹಾಗೂ ಸಾಕ್ಷ್ಯ ಚಿತ್ರಗಳನ್ನು ಪ್ರಸ್ತುತ ಪಡಿಸಲಾಗುತ್ತಿದೆ.<br>➤ ಅಲ್ಲದೆ ಶಾಲಾ/ಕಾಲೇಜುಗಳ ಬಳಿ ಅಂದರೆ 100 ಮೀಟರ್‌ವರೆಗಿನ ಸುತ್ತಲಿನ ಪ್ರದೇಶಗಳಲ್ಲಿ ತಂಬಾಕು ಪದಾರ್ಥಗಳ ಮಾರಾಟ ಮಾಡುವುದನ್ನು ನಿಷೇಧಿಸಲಾಗಿರುತ್ತದೆ. |
| ಇ | ಮಾದಕ ಪದಾರ್ಥಗಳಿಗೆ ಬಲಿಯಾದ ಮಕ್ಕಳ ಪುನರ್ವಸತಿಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು: | ಉದ್ಭವಿಸುವುದಿಲ್ಲ. |
| ಈ | ಶಾಲೆಗಳ ಬಳಿ ಮತ್ತು ಶಾಲೆಗಳಲ್ಲಿ ಮಾದಕ ವಸ್ತುಗಳನ್ನು ಮಾರುವವರು. ವಿತರಿಸುವವರನ್ನು ಬಂಧಿಸಿ ಕ್ರಮ ಕೈಗೊಳ್ಳಲು ಶಿಕ್ಷಣ ಇಲಾಖೆ ಮತ್ತು ಪೊಲೀಸ್ ಇಲಾಖೆ ಜಂಟಿಯಾಗಿ ಏನಾದರೂ ಕ್ರಮ ಕೈಗೊಂಡಿದೆಯೇ: | ಶಾಲೆಗಳ ಬಳಿ ಮಾದಕ ವಸ್ತುಗಳನ್ನು ಮಾರಾಟ ಕಂಡುಬಂದಲ್ಲಿ ಅಂತಹವರ ವಿರುದ್ಧ ಎನ್‌ಡಿಪಿಎಸ್ ಕಾಯ್ದೆ ರೀತ್ಯಾ ಪ್ರಕರಣಗಳನ್ನು ದಾಖಲಿಸಿ ಕ್ರಮ ಜರುಗಿಸಲಾಗುತ್ತದೆ. |
| ಉ | ಮಾದಕ ಪದಾರ್ಥಗಳನ್ನು ಮಾರುವ ವ್ಯಕ್ತಿಗಳನ್ನು ಕಂಡು ಹಿಡಿಯಲು/ಶಿಕ್ಷಿಸಲು ಸರ್ಕಾರ ಏನು ಕ್ರಮ ಕೈಗೊಂಡಿದೆ? | ➤ ಸಾರ್ವಜನಿಕರು ಹೆಚ್ಚಿನ ಸಂಖ್ಯೆಯಲ್ಲಿ ಸೇರುವ ಸಿನೇಮಾ ಮಂದಿರ, ಬೀಚ್, ಪಾರ್ಕ್, ಬಸ್ಸು ನಿಲ್ದಾಣ, ಆಟೋಪಾರ್ಕ್ ಹಾಗೂ ರೈಲು |

ನಿಲ್ದಾಣ ಮುಂತಾದ ಸ್ಥಳಗಳಲ್ಲಿ ಸಾರ್ವಜನಿಕರಲ್ಲಿ ಮಾದಕ ದ್ರವ್ಯ ವಿರೋಧಿ ಜಾಗೃತಿಯನ್ನು ಉಂಟುಮಾಡಲಾಗಿದೆ. ಶಾಲಾ ಕಾಲೇಜುಗಳ ಬಳಿಯಿರುವ ಮಾದಕ ವಸ್ತುಗಳು ದೊರೆಯಬಹುದಾದ ಸಂಶಯಾಸ್ಪದ ಗೂಡಂಗಡಿ. ಹೋಟೆಲ್ ಮತ್ತಿತರ ಸ್ಥಳಗಳ ಮೇಲೆ ಹೆಚ್ಚಿನ ನಿಗಾ ಇರಿಸಲಾಗಿದೆ. ಮಾದಕ ದ್ರವ್ಯದ ವಹಿವಾಟು ಇದಕ್ಕೆ ಪ್ರೇರಣೆ ನೀಡುತ್ತಿರುವ ವ್ಯಕ್ತಿಗಳ ಬಗ್ಗೆ ಮತ್ತು ಖಾಸಗಿ ಕಾರ್ಯಕ್ರಮಗಳ ಪಾರ್ಟಿಗಳಲ್ಲಿ ಮಾದಕ ವಸ್ತುಗಳ ವಿತರಣೆ ಅಥವಾ ಉಪಯೋಗವಾಗುತ್ತಿದೆಯೇ ಎಂಬ ಬಗ್ಗೆಯೂ ಗುಪ್ತ ಮಾಹಿತಿಯನ್ನು ಸಂಗ್ರಹಿಸಿ ಸೂಕ್ತ ಕಾನೂನು ಕ್ರಮ ಕೈಗೊಳ್ಳಲಾಗುತ್ತಿದೆ.

- ಮಾರಾಟದ/ಸೇವನೆ ಕುರಿತಂತೆ ಮಾಹಿತಿ ನೀಡುವ ಬಗ್ಗೆ ದೂರವಾಣಿ ಸಂಖ್ಯೆಯನ್ನು ಸ್ಥಳೀಯ ಪ್ರತಿಕೆಗಳಲ್ಲಿ ಪ್ರಕಟಿಸಿದ್ದು. ಬಾತ್ಮೀದಾರರು ಹೆಚ್ಚಿನ ಸಂಖ್ಯೆಯಲ್ಲಿ ಮಾಹಿತಿಯನ್ನು ನೀಡುತ್ತಿದ್ದು. ಸಂಬಂಧಪಟ್ಟ ಸ್ಥಳಗಳನ್ನು ಪರಿಶೀಲನೆ ನಡೆಸಲಾಗುತ್ತಿದೆ.
- ಮಾದಕ ದ್ರವ್ಯ ಮಾರಾಟ ದಂಧೆಯನ್ನು ನಿಗ್ರಹಿಸುವ ಮತ್ತು ಪತ್ತೆಹಚ್ಚಲು ಶ್ವಾನಗಳನ್ನು ಸೇರ್ಪಡೆಗೊಳಿಸಿದ್ದು. ಮಾದಕ ದ್ರವ್ಯ ಮಾರಾಟ ಜಾಲವನ್ನು ಪತ್ತೆಹಚ್ಚಲು ಸದ್ರಿ ಶ್ವಾನಗಳನ್ನು ಬಳಸಲಾಗುವುದು.
- ಮಾದಕ ದ್ರವ್ಯ ಮಾರಾಟ/ಸೇವನೆ/ಸರಬರಾಜು ಮಾಡುವುದನ್ನು ನಿರ್ಬಂಧಿಸಲು ಎನ್‌ಡಿಪಿಎಸ್ ಕಾಯ್ದೆಯನ್ನು ಸಮರ್ಪಕವಾಗಿ ಜಾರಿಗೊಳಿಸುವ ನಿಟ್ಟಿನಲ್ಲಿ ಎಲ್ಲಾ ಪೊಲೀಸ್ ಅಧಿಕಾರಿಗಳಿಗೆ. ಅಬಕಾರಿ ಪೊಲೀಸ್ ಅಧಿಕಾರಿಗಳಿಗೆ. ವಿಮಾನ ನಿಲ್ದಾಣ ಮತ್ತು ಸೆಂಟ್ರಲ್ ಕಸ್ಟಮ್ಸ್ ಇಲಾಖೆಯ ಅಧಿಕಾರಿಗಳಿಗೆ ನಾರ್ಕೋಟಿಕ್ ಕಂಟ್ರೋಲ್ ಬ್ಯೂರೋ. ಬೆಂಗಳೂರು ರವರ ವತಿಯಿಂದ ಒಂದು ದಿನದ ತರಬೇತಿ ಕಾರ್ಯಾಗಾರವನ್ನು ನಡೆಸಿ ಮಾದಕ ದ್ರವ್ಯ ಪತ್ತೆಗೆ ಸಹಕಾರಿಯಾಗಬಲ್ಲ ಕಿಟ್‌ನ್ನು ಆಯ್ದ ಅಧಿಕಾರಿಗಳಿಗೆ ವಿತರಿಸಲಾಗಿದೆ.
- ಮಾದಕ ಪದಾರ್ಥಗಳನ್ನು ಮಾರುವ ವ್ಯಕ್ತಿಗಳನ್ನು ಪತ್ತೆ ಹಚ್ಚಿ. ಅವರುಗಳ ವಿರುದ್ಧ ಪ್ರಕರಣಗಳನ್ನು ದಾಖಲಿಸಿ. ಎನ್‌ಡಿಪಿಎಸ್ ಕಾಯ್ದೆ ಕಾನೂನಿನ ಅಡಿಯಲ್ಲಿ ಶಿಕ್ಷಿಸಲು ಕ್ರಮಗಳನ್ನು ಜರುಗಿಸಲಾಗುತ್ತಿದೆ.

ಒಇ 06 ಪಿಎಸ್‌ಡಿ 2019

(ಎಂ.ಬಿ. ಪಾಟೀಲ)
ಗೃಹ ಸಚಿವರು